ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 02ನೇ ಮಾರ್ಚ್, 2020

ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿನ ಅವ್ಯವಹಾರದ ಕುರಿತು

ಶ್ರೀ ರವಿಕುಮಾರ್ ಎನ್ (ವಿಧಾನ ಸಭೆಯಿಂದ ಚುನಾಯಿತರಾದವರು) :-

104 (02) ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಗೆ ದಿನಾಂಕ: 5/02/2018ರಂದು ಆದಾಯ ತೆರಿಗೆ ಇಲಾಖೆಯಿಂದ 413.08 ಕೋಟಿ ತೆರಿಗೆ ಬಾಕಿ ಎಂಬ ನೋಟೀಸ್ ಬಂದ 6 ತಿಂಗಳ ಬಳಿಕ ದಿ: 28/08/2018ರಂದು ಆದಾಯ ತೆರಿಗೆ ಕಾಯ್ದೆ ಕಲಂ 10(46) ಅಡಿಯಲ್ಲಿ ತೆರಿಗೆ ವಿನಾಯಿತಿ ಕೋರಿ ಮನವಿ ಸಲ್ಲಿಸಿದ್ದು, ಕರ್ತವ್ಯ ನಿರ್ಲಕ್ಷವಹಿಸಿದ ಅಧಿಕಾರಿಯ ಮೇಲೆ ಕ್ರಮ ಕೈಗೊಂಡ ಕ್ರಮಗಳೇನು;

(ಆ) ಮಂಡಳಿಯು ಅಸ್ತಿತ್ವಕ್ಕೆ ಬಂದ 11 ವರ್ಷಗಳ ಕಾಲ ಆದಾಯ ತೆರಿಗೆ ಕಾಯ್ದೆ ಕಲಂ 10(46) ಅಡಿಯಲ್ಲಿ ತೆರಿಗೆ ವಿನಾಯಿತಿ ಕೋರಿ ಮನವಿ ಸಲ್ಲಿಸದಿರಲು ಕಾರಣಗಳೇನು; ಈ ಪ್ರಕರಣದಲ್ಲಿ ಸಂಪೂರ್ಣವಾಗಿ ಮಂಡಳಿಯ ಅಧಿಕಾರಿ ಮತ್ತು ಸಿಬ್ಬಂದಿಗಳು ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯ ಧೋರಣೆ ಎಸಗಿದ್ದು, ಇಂತಹ ಅಧಿಕಾರಿ ಮತ್ತು ಸಿಬ್ಬಂದಿಗಳನ್ನು ಅಮಾನತುಗೊಳಿಸಿ ವಿಚಾರಣೆ ನಡೆಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ;

(ಇ) 413.08 ಕೋಟಿ ರೂ.ಗಳಲ್ಲಿ ಕೇವಲ ಶೇ.80 ರಷ್ಟು ಮಾತ್ರವೇ ಆದಾಯ ತೆರಿಗೆ ಇಲಾಖೆಯಿಂದ ವಾಪಾಸ್ ಪಡೆಯುವ ನಿರೀಕ್ಷೆ ಇದ್ದು ಶೇಕಡಾ 20ರಷ್ಟು ನಷ್ಟಕ್ಕೆ ಕಾರಣರಾದ ಅಧಿಕಾರಿಗಳ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ; ಬಾಕಿ ಉಳಿದ ಶೇಕಡಾ 20ರಷ್ಟು ಮೊತ್ತವನ್ನು ಸಂಬಂಧಿತ ಅಧಿಕಾರಿಗಳಿಂದ ವಸೂಲಿ ಮಾಡಲು ಕೈಗೊಳ್ಳಲಾದ ಕ್ರಮಗಳೇನು;

(ಈ) ಸಾಮಾನ್ಯ ಬಡ ಕಟ್ಟಡ ಕೂಲಿ ಕಾರ್ಮಿಕರಿಗೆ ಅನ್ಯಾಯ ಮಾಡಿರುವ ಅಧಿಕಾರಿಗಳಿಂದಲೇ ನಷ್ಟವಾಗಿರುವ ಮೊತ್ತ ಮತ್ತು ವಕೀಲರ ಮೊತ್ತವನ್ನು ವಸೂಲು ಮಾಡಲು ಸರ್ಕಾರ ಯಾವಾಗ ಕ್ರಮಕೈಗೊಳ್ಳುವುದು?